KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಏಪ್ರಿಲ್ ೧೬, ೨೦೦೯ (ಚೈತ್ರ ೨೬, ಶಕ ವರ್ಷ ೧೯೩೧) | ಸಂಚಿಕೆ ೧೬ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯಕ್ಕೆ ಸ್ಥಳಾಂತರಿಸಲಾದ 13 ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 28 ಸಸಿವಿ 06, ದಿನಾಂಕ: 29.09.2006.

(2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 110 ಸಅಸೇ 08, ದಿನಾಂಕ: 25.03.2008.

(3) ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಎಂ 341 ಜಿಇಎನ್ 08 ದಿನಾಂಕ: 16.10.2008.

**ಪ್ರಸ್ತಾವನೆ :**

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಜನಸ್ಪಂದನ ಕೋಶಕ್ಕೆ ಮಂಜೂರಾದ 45 ಹುದ್ದೆಗಳ ಪೈಕಿ ಖಾಲಿ ಇದ್ದ ಈ ಕೆಳಕಂಡ 13 ಹುದ್ದೆಗಳನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ:29.09.2006ರ ಸರ್ಕಾರಿ ಆದೇಶದಲ್ಲಿ ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದ ಜನತಾ ದರ್ಶನ ಘಟಕಕ್ಕೆ ದಿನಾಂಕ: 01.06.2006 ರಿಂದ ಜಾರಿಗೆ ಬರುವಂತೆ ಸ್ಥಳಾಂತರಿಸಲಾಯಿತು.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1) | ಶಾಖಾಧಿಕಾರಿ | 1 ಹುದ್ದೆ |
| 2) | ಗ್ರೂಪ್–ಸಿ | 10 ಹುದ್ದೆಗಳು |
| 3) | ಗ್ರೂಪ್–ಡಿ | 2 ಹುದ್ದೆ |
| | **ಒಟ್ಟು** | **13 ಹುದ್ದೆಗಳು** |

ಆನಂತರ ರಾಷ್ಟ್ರಪತಿಗಳ ಆಡಳಿತದಲ್ಲಿ ಘನತೆವೆತ್ತ ರಾಜ್ಯಪಾಲರು ಸಹ ಜನತಾ ದರ್ಶನವನ್ನು ಮುಂದುವರಿಸಿದ ಕಾರಣ ಸದರಿ ಹುದ್ದೆಗಳನ್ನು ಮೇಲೆ (2) ರಲ್ಲಿ ಓದಲಾದ ದಿನಾಂಕ: 25.03.2008ರ ಸರ್ಕಾರಿ ಆದೇಶದಲ್ಲಿ ರಾಷ್ಟ್ರಪತಿಗಳ ಆಡಳಿತ ಜಾರಿ ಇರುವವರೆಗೆ ಸದರಿ ಹುದ್ದೆಗಳನ್ನು ರಾಜ್ಯಪಾಲರ ಸಚಿವಾಲಯದಲ್ಲಿ ಮುಂದುವರಿಸಲಾಯಿತು.

ಮಾನ್ಯ ಮುಖ್ಯಮಂತ್ರಿಗಳ ಉಪ ಕಾರ್ಯದರ್ಶಿಗಳು ಮೇಲೆ (3) ರಲ್ಲಿ ಓದಲಾದ ದಿನಾಂಕ: 16.10.2008ರ ಟಿಪ್ಪಣಿಯಲ್ಲಿ ಸದರಿ 13 ಹುದ್ದೆಗಳ ಅವಶ್ಯಕತೆಯು ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯಕ್ಕೆ ಅವಶ್ಯಕತೆ ಇರುವುದರಿಂದ ಅಲ್ಲಿಯೇ ಮುಂದುವರಿಸಲು ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 64 ಸಸಿವಿ 2006, ಬೆಂಗಳೂರು, ದಿನಾಂಕ: 26ನೇ ನವೆಂಬರ್ 2008**

ಕರ್ನಾಟಕ ಸರ್ಕಾರ ಸಚಿವಾಲಯದ ಜನತಾ ದರ್ಶನಕ್ಕೆ ಸ್ಥಳಾಂತರಿಸಲಾದ 13 ಹುದ್ದೆಗಳನ್ನು ದಿನಾಂಕ: 30.05.2008 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮಾನ್ಯ ಮುಖ್ಯಂತ್ರಿಗಳ ಸಚಿವಾಲಯದಲ್ಲಿ ಮುಂದುವರಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.07.1996 ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 4 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 27 ಇಮುವಿ 2008, ಬೆಂಗಳೂರು, ದಿನಾಂಕ: 29ನೇ ನವೆಂಬರ್ 2008**

**ವಿಷಯ:** ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ / ಇಂಜಿನಿಯರ್ ಮೆಂಬರ್, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ.

ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ / ಇಂಜಿನಿಯರ್ ಮೆಂಬರ್, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರು ಪ್ರಾಧಿಕಾರದ ಕಾಮಗಾರಿಗಳ ಗುತ್ತಿಗೆದಾರರಾದ ಮೆ॥ ಇ.ಸಿ.ಸಿ.ಐ. ಲಿಮಿಟೆಡ್, ಚೆನ್ನೈನ ನಿರ್ದೇಶಕ ಶ್ರೀ ಎಸ್.ಎ. ಮಹಮ್ಮದ್ ಮೊಹಿದ್ದೀನ್, ಜನರಲ್ ಮ್ಯಾನೇಜರ್ ಶ್ರೀ ಇಲಿಯಾಸ್ ಎ. ಲತೀಫ್ ಹಾಗೂ ರೀಜನಲ್ ಮ್ಯಾನೇಜರ್ ಶ್ರೀ ಜಿ.ಎನ್. ಬಸಪ್ಪ ಅವರುಗಳಿಂದ ತಮ್ಮ ಮನೆ ಸಂಖ್ಯೆ 73, 3ನೇ ಮುಖ್ಯರಸ್ತೆ, 5ನೇ ಅಡ್ಡರಸ್ತೆ, ಆರ್.ಎಂ.ವಿ. ಬಡಾವಣೆ 2ನೇ ಹಂತ, ಬೆಂಗಳೂರು ಇಲ್ಲಿ ದಿನಾಂಕ: 6.11.2008ರಂದು ರೂ. 20.00 ಲಕ್ಷ ರೂಪಾಯಿಗಳ ಅಕ್ರಮ ಸಂಭಾವನೆಯನ್ನು ಸ್ವೀಕರಿಸುತ್ತಿದ್ದಾಗಲೇ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿಬಿದ್ದಿರುವುದರಿಂದಲೂ ; ಈ ಆರೋಪಕ್ಕಾಗಿ ಅವರನ್ನು ದಿನಾಂಕ: 6.11.2008ರಿಂದ 10.11.2008ರವರೆಗೆ ನ್ಯಾಯಾಂಗ ಬಂಧನದಲ್ಲಿ ಇಟ್ಟಿರುವುದರಿಂದಲೂ ; ಅವರ ವಿರುದ್ಧ ಈ ಆರೋಪಕ್ಕಾಗಿ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರನ್ವಯ ಅವರ ವಿರುದ್ಧ ತನಿಖೆ ಜಾರಿಯಲ್ಲಿದ್ದು ತನಿಖೆಯನ್ನು ಕಾಯ್ದಿಟ್ಟು ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ ಅವರನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸುವುದು ಅವಶ್ಯವೆಂದು ಕಂಡುಬಂದಿರುವುದರಿಂದ ;

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(2)(ಎ)ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ ನಿಯಮ 10(1)(ಅ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ / ಇಂಜಿನಿಯರ್ ಮೆಂಬರ್, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರ ವಿರುದ್ಧ ಲೋಕಾಯುಕ್ತ ತನಿಖೆಯನ್ನು ಕಾಯ್ದಿಟ್ಟು ದಿನಾಂಕ: 6.11.2008ರಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ / ಇಂಜಿನಿಯರ್ ಮೆಂಬರ್, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರು ಕೆ.ಸಿ.ಎಸ್.ಆರ್ಸ್. ನಿಯಮ 98ರನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ / ಇಂಜಿನಿಯರ್ ಮೆಂಬರ್, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ / ಇಂಜಿನಿಯರ್ ಮೆಂಬರ್, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರ ಸ್ಥಾನಕ್ಕೆ ತಾತ್ಕಾಲಿಕವಾಗಿ ಬದಲಿ ವ್ಯವಸ್ಥೆಯನ್ನು ಮಾಡಲು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ / ನಗರಾಭಿವೃದ್ಧಿ ಇಲಾಖೆ ಇವರು ಕ್ರಮವನ್ನು ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 6 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಎಂ. ಅಮರನಾಥ್ ಸಮತಿ ಕೆ.ಎ.ಎಸ್. (ನಿವೃತ್ತ) ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ – ಬದಲಿ ವಿಚಾರಣಾಧಿಕಾರಿಯನ್ನು ನೇಮಕ ಮಾಡಲು ಪರಿಷ್ಕೃತ ಆದೇಶ ಹೊರಿಡಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂ:ಸಿಆಸುಇ 03 ಎಸ್‌ಇಎಸ್ 2000 ದಿ:28.07.2006.
2. ಸರ್ಕಾರಿ ಆದೇಶ ಸಂ:ಸಿಆಸುಇ 03 ಎಸ್‌ಇಎಸ್ 2000 ದಿ:30.03.2007.
3. ಸರ್ಕಾರಿ ಆದೇಶ ಸಂ:ಸಿಆಸುಇ 03 ಎಸ್‌ಇಎಸ್ 2000 (ಸಿಆಸುಇ 312 ಕೆಇವಿ 07) ದಿನಾಂಕ: 02.01.2008.
4. ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ ಮೈಸೂರು ಅ.ಸ. ಪತ್ರ ಸಂ: ಸಿಸಿಎ:ಮಿಸ್:04 06–07 ದಿ:16.07.08 ಮತ್ತು 28.07.08.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಅಮರನಾಥ್ ಸುಮತಿ ಕೆ.ಎ.ಎಸ್ (ನಿವೃತ್ತ) ಅಧಿಕಾರಿ ಇವರ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ ವಿಚಾರಣೆ ನಡೆಸಲು ಶ್ರೀ ಎ.ಎಸ್. ಶ್ರೀಕಾಂತ್, ಭಾಆಸೇ ಅಂದಿನ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ ಮೈಸೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೊಡಗು ಜಿಲ್ಲಾಧಿಕಾರಿಗಳು ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಈ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ನೇಮಿಸಲಾಗಿದ್ದ ಕೊಡಗು ಜಿಲ್ಲಾಧಿಕಾರಿಗಳ ಕೆಂದ್ರ ಸ್ಥಾನಿಕ ಸಹಾಯಕರ ಬದಲಾಗಿ ಉಪ ವಿಭಾಗಾಧಿಕಾರಿ ಮಡಿಕೇರಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಆದೇಶದಲ್ಲಿ ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದ್ದ ಶ್ರೀ ಎ.ಎಸ್. ಶ್ರೀಕಾಂತ್, ಭಾಆಸೇ ಅಂದಿನ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ ಮೈಸೂರು ಇವರು ವರ್ಗಾವಣೆಗೊಂಡ ಕಾರಣ ವಿಚಾರಣಾಧಿಕಾರಿಯ ನೇಮಕಾತಿಯಲ್ಲಿ ಕೇವಲ ಪದನಾಮ ಮಾತ್ರ ಸೂಚಿಸಿ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರನ್ನು ಈ ಪ್ರಕರಣದಲ್ಲಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಶ್ರೀ ಅಮರನಾಥ್ ಸುಮತಿ ಕೆ.ಎ.ಎಸ್ (ನಿವೃತ್ತ) ಅಧಿಕಾರಿ ಇವರ ವಿರುದ್ಧ ಆರೋಪಗಳನ್ನು ಅವರು ಈ ಹಿಂದೆ ಮಡಿಕೇರಿ ಜಿಲ್ಲೆಯ ಜಿಲ್ಲಾಧಿಕಾರಿಯಾಗಿದ್ದ ಅವಧಿಯಲ್ಲಿಯೇ ದೋಷಾರೋಪಣೆ ಪಟ್ಟಿಯನ್ನು ತಯಾರಿಸಿ ಸರ್ಕಾರಕ್ಕೆ ವರದಿ ಮಾಡಿದ್ದು, ಈಗ ಮೈಸೂರು ವಿಭಾಗದ ಪ್ರಾದೇಶಿಕ ಆಯುಕ್ತರಾಗಿ ಪ್ರಭಾರ ವಹಿಸಿಕೊಂಡ ಕಾರಣ ಈ ಇಲಾಖಾ ವಿಚಾರಣೆಯನ್ನು ಅವರೇ ನಡೆಸುವುದು ಸೂಕ್ತವಲ್ಲವೆಂದು ತಿಳಿಸುತ್ತಾ ಈ ಪ್ರಕರಣದ ವಿಚಾರಣೆಯನ್ನು ನಡೆಸಲು ಬೇರೆ ವಿಭಾಗದ ಪ್ರಾದೇಶಿಕ ಆಯುಕ್ತರಿಗೆ ವಹಿಸುವಂತೆ ಕೋರಿರುತ್ತಾರೆ. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಪ್ರಕರಣದ ವಿಚಾರಣೆ ನಡೆಸಲು ಬದಲಿ ವಿಚಾರಣಾಧಿಕಾರಿಗಳನ್ನು ನೇಮಿಸಲು ನಿರ್ಣಯಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂ:ಸಿಆಸುಇ 312 ಕಇವಿ 2007, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2008**

ಪ್ರಸ್ತಾವನೆಯನ್ನು ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ ಮೈಸೂರು ಇವರ ಬದಲಾಗಿ ಡೈರೆಕ್ಟರ್ ಜನರಲ್ ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇವರನ್ನು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ವಿಚಾರಣಾಧಿಕಾರಿಗಳ ಮುಂದೆ ಪ್ರಕರಣವನ್ನು ಮಂಡಿಸುವ ಸಲುವಾಗಿ ನೇಮಿಸಲಾಗಿದ್ದ ಉಪ ವಿಭಾಗಾಧಿಕಾರಿ, ಮಡಿಕೇರಿ ಕೊಡಗು ಜಿಲ್ಲೆ ಇವರೇ ಮಂಡನಾಧಿಕಾರಿಯಾಗಿ ಮುಂದುವರೆಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 9

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ವಿಷಯ:** ಜಲ ಸಂಪನ್ಮೂಲ ಇಲಾಖೆಯಲ್ಲಿರುವ ಕಾವೇರಿ ಜಲವಿವಾದಕ್ಕೆ ಸಂಬಂಧಿಸಿದ ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 80 ಸಅಸೇ 99, ದಿನಾಂಕ: 2.11.1999.
2. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 98 ಸಸಿವಿ 2006, ದಿನಾಂಕ: 8.1.2007.
3. ಟಿಪ್ಪಣಿ ಸಂಖ್ಯೆ ಜಸಂಇ 60 ಕಾವಿಇ 2008, ದಿನಾಂಕ 14.10.2008, ಸರ್ಕಾರದ ಪ್ರಧಾನ ಕಾರ್ಯದರ್ಶಿ ಜಲ ಸಂಪನ್ಮೂಲ ಇಲಾಖೆ ಇವರಿಂದ.

**ಪ್ರಸ್ತಾವನೆ:**

ಜಲ ಸಂಪನ್ಮೂಲ ಇಲಾಖೆಯಲ್ಲಿ ಮೇಲೆ (1)ರಲ್ಲಿ ಓದಲಾದ ದಿನಾಂಕ: 2.11.1999ರ ಸರ್ಕಾರಿ ಆದೇಶದಲ್ಲಿ ಉನ್ನತೀಕರಿಸಲಾದ ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) ಹುದ್ದೆಯನ್ನು ಕಾಲಕಾಲಕ್ಕೆ ಮುಂದುವರೆಸಿ ಅಂತಿಮವಾಗಿ ಮೇಲೆ (2)ರಲ್ಲಿ ಓದಲಾದ ದಿನಾಂಕ: 8.1.2007ರ ಸರ್ಕಾರಿ ಆದೇಶದಲ್ಲಿ ದಿನಾಂಕ: 1.1.2007ರಿಂದ ದಿನಾಂಕ: 31.12.2008ರವರೆಗೆ

ಮುಂದುವರೆಸಲಾಗಿತ್ತು. ಜಲ ಸಂಪನ್ಮೂಲ ಇಲಾಖೆಯಲ್ಲಿ ಕಾವೇರಿ, ಕೃಷ್ಣಾ, ಮಹಾದಾಮಿ ಇತ್ಯಾದಿ ಅಂತರ ರಾಜ್ಯ ಜಲ ವಿವಾದದ ವಿಷಯಗಳನ್ನು ನಿರ್ವಹಿಸುತ್ತಿರುವುದರಿಂದ ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯ ಅವಶ್ಯಕತೆ ತೀವ್ರವಾಗಿದ್ದು ಸದರಿ ಹುದ್ದೆಯನ್ನು ದಿನಾಂಕ: 1.1.2009 ರಿಂದ ದಿನಾಂಕ: 31.12.2010 ರವರೆಗೆ ವಿಸ್ತರಿಸುವಂತೆ ಪ್ರಧಾನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ ಅವರು ಕೋರಿದ್ದಾರೆ. ಇದನ್ನು ಪರಿಶೀಲಿಸಿ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 876 ಸಅಸೇ 2008, ಬೆಂಗಳೂರು, ದಿನಾಂಕ: 26ನೇ ನವೆಂಬರ್ 2008**

ಕರ್ನಾಟಕ ಸರ್ಕಾರ ಸಚಿವಾಲಯದ ಜಲ ಸಂಪನ್ಮೂಲ ಇಲಾಖೆಯಲ್ಲಿರುವ ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) ಈ ಹುದ್ದೆಯನ್ನು ದಿನಾಂಕ: 1.1.2009 ರಿಂದ ದಿನಾಂಕ: 31.12.2010 ರವರೆಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 11

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಬಿ. ಚಿಕ್ಕರಾಜು, ಸರ್ಕಾರದ ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಡಿ. ಧನಂಜಯ, ಸಹಾಯಕ, ಕರ್ನಾಟಕ ಸರ್ಕಾರ ಸಚಿವಾಲಯ ಅವರುಗಳ ವಿರುದ್ಧ ಇಲಾಖಾ ವಿಚಾರಣೆ – ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ ಸಿಆಸುಇ 211 ಸೇಇವಿ 2007 ಮತ್ತು ಸಂಖ್ಯೆ ಸಿಆಸುಇ 211 ಸೇಇವಿ 2007 (1), ದಿನಾಂಕ: 26.5.2008.
2. ಶ್ರೀ ಬಿ. ಚಿಕ್ಕರಾಜು, ಅಧೀನ ಕಾರ್ಯದರ್ಶಿ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ:22.7.2008.
3. ಶ್ರೀ ಡಿ. ಧನಂಜಯ, ಸಹಾಯಕ ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ: 25.08.2008.

**ಪ್ರಸ್ತಾವನೆ:**

ಶ್ರೀ ಬಿ. ಚಿಕ್ಕರಾಜು, ಅಧೀನ ಕಾರ್ಯದರ್ಶಿ ಮತ್ತು ಶ್ರೀ ಡಿ. ಧನಂಜಯ, ಸಹಾಯಕ, ಕರ್ನಾಟಕ ಸರ್ಕಾರ ಸಚಿವಾಲಯ ಇವರುಗಳು ಸಚಿವಾಲಯದ ಕಂದಾಯ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಜಮೀನು ಖರೀದಿಸಲು ಅನುಮತಿ ನೀಡಿದ ಅವಧಿಯನ್ನು ವಿಸ್ತರಿಸಲು ಕೋರಿ ಬಂದ ಅರ್ಜಿಯನ್ನು ವಿಲೇವಾರಿ ಮಾಡಲು ಅಕ್ರಮ ಸಂಭಾವನೆ ಕೇಳಿದ, ಭೂಸುಧಾರಣಾ ಕಾಯಿದೆ ಸಡಿಲಿಸಿ ಜಮೀನು ಖರೀದಿಸಲು ಅನುಮತಿ ನೀಡಲು ಅಕ್ರಮ ಸಂಭಾವನೆ ಕೇಳಿ ಪಡೆದ, ಅನಗತ್ಯವಾಗಿ ನಗರ ಯೋಜನಾ ನಿರ್ದೇಶಕರೊಡನೆ ಪತ್ರ ವ್ಯವಹಾರ ನಡೆಸಿ ಜಮೀನು ಖರೀದಿಗೆ ಅನುಮತಿ ನೀಡಲು ಅನಗತ್ಯ ವಿಳಂಬ ಮಾಡಿದ ಹಾಗೂ ಕಡತದ ಚಲನವಲನ ಕುರಿತು ತಪ್ಪು ಮಾಹಿತಿ ನೀಡಿದ ಆರೋಪಗಳಿಗಾಗಿ ಅವರುಗಳಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11 ಮತ್ತು 11–ಎ ರ ಅನ್ವಯ ಮೇಲೆ (1) ರಲ್ಲಿ ಓದಲಾದ ದಿನಾಂಕ: 26.05.2008ರ ನೋಟೀಸ್ ನೀಡುವ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಶ್ರೀ ಬಿ. ಚಿಕ್ಕರಾಜು ಅಧೀನ ಕಾರ್ಯದರ್ಶಿ ರವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 22.07.2008ರ ಮನವಿಯಲ್ಲಿ ಮತ್ತು ಶ್ರೀ ಡಿ. ಧನಂಜಯ, ಸಹಾಯಕ ರವರು ಮೇಲೆ (3) ರಲ್ಲಿ ಓದಲಾದ ದಿನಾಂಕ:25.08.2008ರ ಮನವಿಯಲ್ಲಿ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸಿ, ಅವರುಗಳ ವಿರುದ್ಧ ಮಾಡಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಸದರಿಯವರುಗಳ ಪ್ರತಿರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಅವರುಗಳು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆಯಲ್ಲಿ ಪರಿಗಣಿಸಬಹುದಾದ ಯಾವ ಅಂಶಗಳು ಕಂಡು ಬರುತ್ತಿಲ್ಲವಾದ ಹಿನ್ನೆಲೆಯಲ್ಲಿ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 211 ಸೇಇವಿ 2007, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2008**

ಶ್ರೀ ಬಿ. ಚಿಕ್ಕರಾಜು, ಸರ್ಕಾರದ ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಡಿ. ಧನಂಜಯ, ಸಹಾಯಕ, ಕರ್ನಾಟಕ ಸರ್ಕಾರ ಸಚಿವಾಲಯ ಇವರುಗಳ ವಿರುದ್ಧದ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(2)ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕುಕ್ಕಾಜೆ ರಾಮಕೃಷ್ಣಭಟ್, ನಿವೃತ್ತ ನ್ಯಾಯಾಧೀಶರು, ಬೆಂಗಳೂರು

ಅವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಅದೇ ನಿಯಮಾವಳಿಗಳ ನಿಯಮ 11(5)(ಸಿ)ರ ಅನ್ವಯ ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸಮನ್ವಯ) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡುತ್ತದೆ.

ವಿಚಾರಣಾಧಿಕಾರಿಗಳು ಈ ವಿಚಾರಣೆಗಾಗಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 05 ದಿನಾಂಕ: 23.08.2005 ರಲ್ಲಿ ನಿಗಧಿಪಡಿಸಿರುವ ರೂ.6,000 (ರೂಪಾಯಿ ಆರು ಸಾವಿರಗಳು ಮಾತ್ರ)ಗಳ ಗೌರವಧನ ಹಾಗೂ ವಾಹನ ಭತ್ಯೆಗಳನ್ನು ಪಡೆಯುತ್ತಾರೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಸ್ಟೇಷನರಿ, ಶೀಘ್ರಲಿಪಿಗಾರರ ಸೇವೆಯನ್ನು ಒದಗಿಸಲು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಅವರು ಕ್ರಮ ಕೈಗೊಳ್ಳುತ್ತಾರೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆಯನ್ನು ನಡೆಸಿ ಆರೋಪ ಸಾಬೀತಾಗಿರುವ ಅಥವಾ ಸಾಬೀತಾಗದೇ ಇರುವ ಅಭಿಪ್ರಾಯಗಳನ್ನು ಒಳಗೊಂಡ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ 3 ತಿಂಗಳುಗಳ ಒಳಗಾಗಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 13

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಯಲ್ಲಿರುವ ಬೆಂಗಳೂರು–ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಯೋಜನೆಗೆ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸುವ ಹಾಗೂ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 44 ಸಅಸೇ 08 ದಿನಾಂಕ: 18.03.2008.

2. ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ 5 ಸಿಆರ್‌ಎಂ 08 ದಿನಾಂಕ: 28.06.2008.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 18.03.2008ರ ಸರ್ಕಾರಿ ಆದೇಶದಲ್ಲಿ ಸಚಿವಾಲಯದ ಲೋಕೋಪಯೋಗಿ ಇಲಾಖೆಯಲ್ಲಿನ ಬೆಂಗಳೂರು–ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಯೋಜನೆಗೆ ಮಂಜೂರಾದ ಉಪ ಕಾರ್ಯದರ್ಶಿ (ಕಾನೂನು), ಕಾರ್ಯಪಾಲಕ ಇಂಜಿನಿಯರ್ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 07.11.2007 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿತ್ತು. ಲೋಕೋಪಯೋಗಿ ಇಲಾಖೆಯು ಮೇಲೆ (2) ರಲ್ಲಿ ಓದಲಾದ ದಿನಾಂಕ: 28.06.2008ರ ಅನಧಿಕೃತ ಟಿಪ್ಪಣಿಯಲ್ಲಿ ಬಿ.ಎಂ.ಐ.ಸಿ.ಪಿ.ಗೆ ಸಂಬಂಧಪಟ್ಟಂತೆ ಸರ್ವೋಚ್ಚ ನ್ಯಾಯಾಲಯ ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯಗಳಲ್ಲಿ ಬಾಕಿ ಇರುವ ಹಲವಾರು ಪ್ರಕರಣಗಳಲ್ಲಿ ಯೋಜನಾ ಸಮನ್ವಯಾಧಿಕಾರಿಯೇ ಅಫಿಡವಿಟ್‌ಗಳನ್ನು ಸಲ್ಲಿಸುತ್ತಿರುವುದರಿಂದ ಅದೇ ಹುದ್ದೆ ಮುಂದುವರಿಯುವುದು ಸೂಕ್ತವೆಂದು ತಿಳಿಸಿ ದಿನಾಂಕ: 01.01.2005 ರಿಂದಲೇ ಜಾರಿಗೆ ಬರುವಂತೆ ಈ ಕೆಳಕಂಡ ಹುದ್ದೆಗಳನ್ನು ಹೊಸದಾಗಿ ಸೃಜಿಸಲು ಕೋರಿದೆ.

ಹೊಸದಾಗಿ ಸೃಜಿಸಬೇಕಾಗಿರುವ ಬಿ.ಎಂ.ಐ.ಸಿ.ಪಿ. ಶಾಖೆ

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1) | ಶಾಖಾಧಿಕಾರಿ | 1 ಹುದ್ದೆ |
| 2) | ಹಿರಿಯ ಸಹಾಯಕ | 1 ಹುದ್ದೆ |
| 3) | ಸಹಾಯಕ | 1 ಹುದ್ದೆ |
| 4) | ಕಿರಿಯ ಸಹಾಯಕ | 1 ಹುದ್ದೆ |
| 5) | ದಲಾಯತ್ | 1 ಹುದ್ದೆ |

ಹಾಗೆಯೇ ಈ ಕೆಳಕಂಡ ಹುದ್ದೆಗಳನ್ನು ಮುಂದುವರಿಸಲು ಕೋರಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1) | ಯೋಜನಾ ಸಮನ್ವಯಾಧಿಕಾರಿ<br>ಬಿ.ಎಂ.ಐ.ಸಿ.ಪಿ. ವೇತನ ಶ್ರೇಣಿರಹಿತ | 1 ಹುದ್ದೆ |
| 2) | ಶೀಘ್ರಲಿಪಿಗಾರ | 1 ಹುದ್ದೆ |
| 3) | ಕಿರಿಯ ಸಹಾಯಕ | 1 ಹುದ್ದೆ |
| 4) | ದಲಾಯತ್ | 1 ಹುದ್ದೆ |
| 5) | ವಾಹನ ಚಾಲಕ | 1 ಹುದ್ದೆ |

ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಪ್ರಸ್ತಾವನೆಯನ್ನು ಪರಿಶೀಲಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 148 ಸಅಸೇ 2008, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್ 2008**

ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯ ಬಿ.ಎಂ.ಐ.ಸಿ.ಪಿ. ಹೊಸ ಶಾಖೆಗೆ ಈ ಕೆಳಕಂಡ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಸೃಜಿಸಿ ಮುಂದುವರಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ | |
|---|---|---|---|
| 1) | ಶಾಖಾಧಿಕಾರಿ | 1 ಹುದ್ದೆ | ಸದರಿ ಹುದ್ದೆಗಳನ್ನು ಪ್ರತಿನಿಯೋಜನೆ ಮೇಲೆ (Redeployment) ತುಂಬುವುದು |
| 2) | ಹಿರಿಯ ಸಹಾಯಕ | 1 ಹುದ್ದೆ | |
| 3) | ಸಹಾಯಕ | 1 ಹುದ್ದೆ | |
| 4) | ಕಿರಿಯ ಸಹಾಯಕ | 1 ಹುದ್ದೆ | |
| 5) | ದಲಾಯತ್ | 1 ಹುದ್ದೆ | |

ಮುಂದುವರಿದಂತೆ ಈ ಕೆಳಕಂಡ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1) | ಯೋಜನಾ ಸಮನ್ವಯಾಧಿಕಾರಿ ಬಿ.ಎಂ.ಐ.ಸಿ.ಪಿ. (ವೇತನ ಶ್ರೇಣಿರಹಿತ) | 1 ಹುದ್ದೆ |
| 2) | ಶೀಘ್ರಲಿಪಿಗಾರ | 1 ಹುದ್ದೆ |
| 3) | ಕಿರಿಯ ಸಹಾಯಕ | 1 ಹುದ್ದೆ |
| 4) | ದಲಾಯತ್ | 1 ಹುದ್ದೆ |
| 5) | ವಾಹನ ಚಾಲಕ | 1 ಹುದ್ದೆ |

ಹಾಗೆಯೇ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಉಪ ಕಾರ್ಯದರ್ಶಿ (ಕಾನೂನು) | ಕಾರ್ಯಪಾಲಕ ಇಂಜಿನಿಯರ್ |
|---|---|---|---|
| 1) | ಪತ್ರಾಂಕಿತ ಆಪ್ತ ಸಹಾಯಕ/ಹಿರಿಯ ಶೀಘ್ರಲಿಪಿಗಾರ | 1 ಹುದ್ದೆ | 1 ಹುದ್ದೆ |
| 2) | ಕಿರಿಯ ಸಹಾಯಕ | 1 ಹುದ್ದೆ | 1 ಹುದ್ದೆ |
| 3) | ದಲಾಯತ್ | 1 ಹುದ್ದೆ | 1 ಹುದ್ದೆ |
| | **ಒಟ್ಟು** | **3 ಹುದ್ದೆ** | **3 ಹುದ್ದೆ** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1356 ವೆಚ್ಚ–5/2008 ದಿನಾಂಕ: 18.11.2008 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

ಪಿ.ಆರ್. 14

**ವಿಷಯ:** ಬಾರ್ ಕೌನ್ಸಿಲ್‌ನಿಂದ ಆಯ್ಕೆಯಾದ ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಿಗೆ ನಿಗಧಿಪಡಿಸಿರುವ ಡಿ.ಸಿ.ಆರ್.ಜಿ. ಗರಿಷ್ಠ ಮಿತಿಯನ್ನು ಕರ್ನಾಟಕ ನ್ಯಾಯಾಂಗ ಸೇವೆಯಿಂದ ಬಡ್ತಿ ಹೊಂದಿದ ನ್ಯಾಯಾಧೀಶರಿಗೂ ವಿಸ್ತರಿಸುವ ಬಗ್ಗೆ – ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ:ಸಿಆಸುಇ 17 ಸೇಉನ್ಯಾ 2007, ದಿ:15.06.2007.
2. ರಿಟ್ ಅರ್ಜಿ ಸಂ:11805/2007(ಎಸ್) – ಶ್ರೀ ಎನ್.ಎಸ್. ವೀರಭದ್ರಯ್ಯ ಮತ್ತು ಇತರರು ವಿರುದ್ಧ ಮಹಾಲೇಖಪಾಲರು ಮತ್ತು ರಾಜ್ಯ ಸರ್ಕಾರ ಪ್ರಕರಣದಲ್ಲಿ ಕರ್ನಾಟಕ ಉಚ್ಚನ್ಯಾಯಾಲಯವು ನೀಡಿದ ದಿ:4.08.2008ರ ತೀರ್ಪು.

**ಪ್ರಸ್ತಾವನೆ:**

ಕರ್ನಾಟಕ ನ್ಯಾಯಾಂಗ ಸೇವೆಯಿಂದ ರಾಜ್ಯ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿ ಬಡ್ತಿ ಹೊಂದಿ ನಿವೃತ್ತರಾದ ಶ್ರೀ ಎಂ.ಪಿ. ಚಿನ್ನಪ್ಪ, ಶ್ರೀ ಹೆಚ್.ಎನ್. ನಾರಾಯಣ್ ಮತ್ತು ಶ್ರೀ ಮೊಹಮ್ಮದ್ ಅನ್ವರ್ ಅವರುಗಳು ರಿಟ್ ಅರ್ಜಿ ಸಂ:2979–

81/2003 ನ್ನು ಸಲ್ಲಿಸಿ ಬಾರ್ ಕೌನ್ಸಿಲ್‌ನಿಂದ ನೇರವಾಗಿ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿ ನೇಮಕಗೊಂಡವರಿಗೆ ಭಾರತ ಸರ್ಕಾರವು ಡಿ.ಸಿ.ಆರ್.ಜಿ. ಗರಿಷ್ಠ ಮೊತ್ತವನ್ನು ರೂ.3.50 ಲಕ್ಷಕ್ಕೆ ನಿಗದಿಗೊಳಿಸಿದ್ದು ಕರ್ನಾಟಕ ನ್ಯಾಯಾಂಗ ಸೇವೆಯಿಂದ ಉಚ್ಚ ನ್ಯಾಯಾಲಯಕ್ಕೆ ನೇಮಕಗೊಂಡ ನ್ಯಾಯಾಧೀಶರುಗಳಿಗೆ ಮಾತ್ರ ರಾಜ್ಯ ಸರ್ಕಾರವು ರೂ.2.50 ಲಕ್ಷ ಗರಿಷ್ಠ ಮಿತಿ ನಿಗಧಿಗೊಳಿಸಿರುವುದು ಕಾನೂನು ಬಾಹಿರವೆಂದು ವಾದಿಸಿ ತಮ್ಮ ಡಿ.ಸಿ.ಆರ್.ಜಿ. ಗರಿಷ್ಠ ಮೊತ್ತವನ್ನು ರೂ.3.50 ಲಕ್ಷಕ್ಕೆ ನಿಗದಿಪಡಿಸಲು ನಿರ್ದೇಶನ ನೀಡಬೇಕೆಂದು ಪ್ರಾರ್ಥಿಸಿದ್ದರು. ಮಾನ್ಯ ನ್ಯಾಯಾಲಯವು ದಿನಾಂಕ:16.11.2006 ರಂದು ರಿಟ್ ಅರ್ಜಿದಾರರ ಪರ ತೀರ್ಪು ನೀಡಿದ ಮೇರೆಗೆ ಇದೊಂದು ಅಪವಾದಾತ್ಮಕ ಪ್ರಕರಣವೆಂದು ಪರಿಗಣಿಸಿ ದಿನಾಂಕ:15.06.2007ರಂದು ಹೊರಡಿಸಿದ ಆದೇಶದಲ್ಲಿ ಅರ್ಜಿದಾರರಿಗೆ ಮಾತ್ರ ಸಂಬಂಧಿಸಿದಂತೆ ಬಾರ್ ಕೌನ್ಸಿಲ್‌ನಿಂದ ಆಯ್ಕೆಯಾದ ನ್ಯಾಯಾಧೀಶರಿಗೆ ನೀಡುತ್ತಿರುವ ರೀತಿಯಲ್ಲೇ ಸದರಿ ಮೂವರು ನಿವೃತ್ತ ನ್ಯಾಯಾಧೀಶರಿಗೆ ಡಿಸಿಆರ್‌ಜಿ ಗರಿಷ್ಠ ಮಿತಿಯನ್ನು ರೂ.3.50 ಲಕ್ಷಕ್ಕೆ ಸೀಮಿತಗೊಳಿಸಲಾಯಿತು.

ಕರ್ನಾಟಕ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಾದ ಎನ್.ಎಸ್. ವೀರಭದ್ರಯ್ಯ ಹಾಗೂ ಇತರ 12 ಮಂದಿ ಹಾಗೂ ನಿಧನ ಹೊಂದಿರುವ ಒಬ್ಬ ನ್ಯಾಯಾಧೀಶರ ಕುಟುಂಬದ ಮೂವರು ಸದಸ್ಯರು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂ:11805/2007(ಎಸ್)ನ್ನು ಸಲ್ಲಿಸಿ ಶ್ರೀ ಎಂ.ಪಿ. ಚಿನ್ನಪ್ಪ ಹಾಗೂ ಇತರ ಇಬ್ಬರಂತೆಯೇ ತಾವುಗಳೂ ಕೂಡ ಹೆಚ್ಚಿಸಿದ ಡಿ.ಸಿ.ಆರ್.ಜಿ. ಗರಿಷ್ಠ ಮಿತಿಗೆ ಅರ್ಹರೆಂದು ಪರಿಗಣಿಸಿ ಎಲ್ಲಾ ಸೌಲಭ್ಯ ನೀಡುವಂತೆ ನಿರ್ದೇಶಿಸಲು ಪ್ರಾರ್ಥಿಸಿದ್ದರು. ಈ ಅರ್ಜಿಯ ಕುರಿತು ಕರ್ನಾಟಕ ಉಚ್ಚ ನ್ಯಾಯಾಲಯವು ಮೇಲೆ (2) ರಲ್ಲಿ ಓದಲಾದ ದಿನಾಂಕ:04.08.2008 ರಂದು ನೀಡಿದ ತೀರ್ಪಿನಲ್ಲಿ ಅರ್ಜಿದಾರರ ಕೋರಿಕೆಯನ್ನು ಮಾನ್ಯ ಮಾಡಿರುವುದಾಗಿದೆ ಹಾಗೂ ಅರ್ಜಿದಾರರಿಗೆ ಡಿ.ಸಿ.ಆರ್.ಜಿ.ಯ ವ್ಯತ್ಯಾಸದ ಮೊತ್ತವನ್ನು ಈ ಕುರಿತು ನ್ಯಾಯಾಲಯವು ನೀಡಿದ ತೀರ್ಪಿನ ಆದೇಶದ ದಿನಾಂಕದಿಂದ 2 ತಿಂಗಳೊಳಗೆ ಪಾವತಿ ಮಾಡುವಂತೆ, ತಪ್ಪಿದಲ್ಲಿ ಅವರಿಗೆ ಪಾವತಿ ಮಾಡಬೇಕಾದ ದಿನಾಂಕದಿಂದ ವಾಸ್ತವವಾಗಿ ಪಾವತಿ ಮಾಡಿದ ದಿನಾಂಕದವರೆಗೆ ಶೇಕಡ 10 ರಷ್ಟು ಬಡ್ಡಿ ಪಾವತಿ ಮಾಡಬೇಕೆಂದು ಆದೇಶಿಸಿದೆ. ಅಲ್ಲದೇ ಕರ್ನಾಟಕ ನ್ಯಾಯಾಂಗ ಸೇವೆಯಿಂದ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿ ಬಡ್ತಿ ಹೊಂದಿದವರೆಲ್ಲರಿಗೂ ಸಹ ಡಿ.ಸಿ.ಆರ್.ಜಿ ಗರಿಷ್ಠ ಮಿತಿಯನ್ನು ಬಾರ್ ಕೌನ್ಸಿಲ್‌ನಿಂದ ಆಯ್ಕೆಗೊಂಡ ನ್ಯಾಯಾಧೀಶರಿಗೆ ನೀಡುವಂತೆ ಸಮಾನಾಂತರವಾಗಿ ರೂ.3.50 ಲಕ್ಷಗಳಿಗೆ ನಿಗಧಿಪಡಿಸಬೇಕೆಂದು ಆದೇಶಿಸಿದೆ.

ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶವನ್ನು ಅನುಷ್ಠಾನಗೊಳಿಸಲು ತೀರ್ಮಾನಿಸಿರುವ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಸಿಆಸುಇ 60 ಸೇಉನ್ಯಾ 2007, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಬಾರ್ ಕೌನ್ಸಿಲ್‌ನಿಂದ ಉಚ್ಚ ನ್ಯಾಯಾಲಯಕ್ಕೆ ನೇರವಾಗಿ ಆಯ್ಕೆಗೊಂಡು ನೇಮಕಗೊಂಡ ನ್ಯಾಯಾಧೀಶರಿಗೆ ನೀಡುತ್ತಿರುವ ಮಾದರಿಯಲ್ಲಿಯೇ ಕರ್ನಾಟಕ ನ್ಯಾಯಾಂಗ ಸೇವೆಯಿಂದ ಉಚ್ಚ ನ್ಯಾಯಾಲಯಕ್ಕೆ ಬಡ್ತಿ ಹೊಂದಿ ನೇಮಕವಾದ ನ್ಯಾಯಾಧೀಶರುಗಳಿಗೆ ಸಹ ಅಪವಾದಾತ್ಮಕ ಪ್ರಕರಣವೆಂದು ಪರಿಗಣಿಸಿ ನಿವೃತ್ತಿ ಉಪದಾನ (ಡಿ.ಸಿ.ಆರ್.ಜಿ) ಗರಿಷ್ಠ ರೂ.3.50 ಲಕ್ಷಗಳಿಗೆ ನಿಗಧಿಪಡಿಸಿದೆ.

ರಿಟ್ ಅರ್ಜಿ ಸಂ:11805/2007 ರಲ್ಲಿನ 13 ಅರ್ಜಿದಾರರು ಹಾಗೂ 3 ಮಂದಿ ನಿಧನ ಹೊಂದಿದ ನ್ಯಾಯಾಧೀಶರ ಕುಟುಂಬದ ಸದಸ್ಯರಿಗೆ ದಿನಾಂಕ:04.08.2008ರ ಆದೇಶದಲ್ಲಿ ನ್ಯಾಯಾಲಯವು ನಿರ್ದೇಶಿಸಿರುವಂತೆ ಪಾವತಿಸಬೇಕಾದ ನಿವೃತ್ತಿ ಉಪದಾನದ ಮೇಲಿನ ಬಡ್ಡಿಯನ್ನು ಸಹ ಪಾವತಿಸಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂ: ಆಇ 980 ಸೇ–1 2008, ದಿನಾಂಕ:6.10.2008 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 15 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಕೆ.ಎಂ. ರೇಣುಕಾರಾಧ್ಯ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಮೀನುಗಾರಿಕೆ ಇಲಾಖೆ, ಮಾಗಡಿ, ರಾಮನಗರ ಜಿಲ್ಲೆ, ಇವರ ವಿರುದ್ಧ ನಡೆಸಲಾದ ಇಲಾಖಾ ವಿಚಾರಣೆಯ ಮೇರೆಗೆ ಸದರಿಯವರಿಗೆ ಕಠಿಣ ದಂಡನೆಯನ್ನು ವಿಧಿಸುವ ಬಗ್ಗೆ.

**ಓದಲಾಗಿದೆ:** 1. ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು, ಇವರ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಆಡಳಿತ(2)/84/1998–99 ದಿನಾಂಕ:29.02.2000.

2. ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು, ಇವರ ಮುಂದುವರೆದ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ:ಆಡಳಿತ(2)/84/1998–99 ದಿನಾಂಕ:07.08.2000.
3. ಮೀನುಗಾರಿಕೆ ನಿರ್ದೇಶಕರ ಕಛೇರಿ ಆದೇಶ ಸಂಖ್ಯೆ:ಆಡಳಿತ(2)/84/1998–99 ದಿನಾಂಕ: 20.12.2001.
4. ಮೀನುಗಾರಿಕೆ ನಿರ್ದೇಶಕರ 2ನೇ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ:ಆಡಳಿತ(2)/ 84/1998–99 ದಿನಾಂಕ:22.03.2003.
5. ಮೀನುಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:ಆಡಳಿತ(2)/84/1998–99 ದಿನಾಂಕ:10.11.2003.
6. ಸರ್ಕಾರದ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ:ಪಸಂಮೀ/241/ಮೀಇಸೇ/2003 ದಿನಾಂಕ:06.06.2005.
7. ಆರೋಪಿತ ಅಧಿಕಾರಿಯವರ ಲಿಖಿತ ಹೇಳಿಕೆ ದಿನಾಂಕ: 18.07.2005.
8. ಸರ್ಕಾರದ ಹಿಂಬರಹ ಸಂಖ್ಯೆ:ಪಸಂಮೀ/241/ಮೀಇಸೇ/2003 ದಿನಾಂಕ:29.08.2005.
9. ಆರೋಪಿತ ಅಧಿಕಾರಿಯವರ ಮನವಿ ಪತ್ರ ದಿನಾಂಕ: 19.09.2005.
10. ಸರ್ಕಾರದ ಹಿಂಬರಹ ಸಂಖ್ಯೆ:ಪಸಂಮೀ/241/ಮೀಇಸೇ/2003 ದಿನಾಂಕ:26.11.2005.
11. ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ, ಇವರ ಪತ್ರ ಸಂಖ್ಯೆ:ಪಿಎಸ್‌ಸಿ/126/ ಸಿಎನ್‌ಎಸ್/2006 ದಿನಾಂಕ: 06.12.2006.
12. ಮೀನುಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:ಆಡಳಿತ(2)/49/2004–05 ದಿನಾಂಕ:29.05.2008.

**ಪ್ರಸ್ತಾವನೆ:**

ಈ ಪ್ರಕರಣದ ಆಪಾದಿತ ಅಧಿಕಾರಿಯರಾದ ಶ್ರೀ ಕೆ.ಎಂ.ರೇಣುಕಾರಾಧ್ಯ, ಪ್ರಸ್ತುತ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಮೀನುಗಾರಿಕೆ ಇಲಾಖೆ, ಮಾಗಡಿ, ರಾಮನಗರ ಜಿಲ್ಲೆ, ಇವರು ಹಿಂದೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಕೂಡ್ಲಿಗಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ 1996–97, 97–98 ಮತ್ತು 98–99ನೇ ಸಾಲಿನಲ್ಲಿ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಹಡಗಲಿ ಮತ್ತು ಪರಪನಹಳ್ಳಿ ಈ ಹುದ್ದೆಗಳ ಅಧಿಕ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಕೆರೆಗಳ ಮೀನು ಪಾಶುವಾರು ಹಕ್ಕು ವಿಲೇವಾರಿ ಮಾಡಿ ಹಣ ವಸೂಲು ಮಾಡದಿರುವುದು, ಮೀನುಮರಿ ಸಾಲದ ರೂಪದಲ್ಲಿ ವಿತರಣೆ ಮಾಡಿ, ಮೀನುಮರಿ ಮೌಲ್ಯವನ್ನು ವಸೂಲು ಮಾಡದಿರುವುದು ಹಾಗೂ ಡಿ.ಡಿ. ಹಣವನ್ನು ನಗದೀಕರಣ ದುರುಪಯೋಗಪಡಿಸಿಕೊಂಡಿರುವುದು, ಇತ್ಯಾದಿ ದೋಷಾರೋಪಣೆಗಳ ಕುರಿತು ಅವರ ವಿರುದ್ಧ ನಡೆಸಲಾದ ಇಲಾಖಾ ವಿಚಾರಣಾ ವರದಿಯ ಆಧಾರದಲ್ಲಿ ಅವರಿಗೆ ಕಠಿಣ ದಂಡನೆಯನ್ನು ವಿಧಿಸುವಂತೆ ಕೋರಿ ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಪತ್ರದಲ್ಲಿ ಮೀನುಗಾರಿಕೆ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಪ್ರಕರಣದ ಹಿನ್ನೆಲೆ:**

2) ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು ಇವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 11ರನ್ವಯ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಕಾರಣ ಕೇಳುವ ತಿಳುವಳಿಕೆ ಪತ್ರವನ್ನು ದೋಷಾರೋಪಣಾ ಪಟ್ಟಿಯೊಂದಿಗೆ ದಿನಾಂಕ:29.02.2000ರಲ್ಲಿ ಜಾರಿ ಮಾಡಿ ಸದರಿ ಆಪಾದಿತ ಅಧಿಕಾರಿಯ ವಿರುದ್ಧ 06 ಆರೋಪಗಳನ್ನು ಹೊರಿಸಲಾಗಿತ್ತು. ತದನಂತರ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ:07.08.2000ರ ಮುಂದುವರೆದ ಮತ್ತೊಂದು ಕಾರಣ ಕೇಳುವ ತಿಳುವಳಿಕೆ ಪತ್ರದಲ್ಲಿ ಮತ್ತೆ 02 ಆರೋಪಗಳನ್ನು ಹೀಗೆ ಸದರಿಯವರ ವಿರುದ್ಧ ಒಟ್ಟು 08 ದೋಷಾರೋಪಣೆಗಳನ್ನು ಹೊರಿಸಿ ಈ ಬಗ್ಗೆ ಅವರ ಲಿಖಿತ ಸಮಜಾಯಿಷಿ ಸಲ್ಲಿಸುವಂತೆ ಸೂಚಿಸಿರುತ್ತಾರೆ. ಈ ಎರಡೂ ನೋಟೀಸ್‌ಗೂ ಆಪಾದಿತ ಅಧಿಕಾರಿಯವರು ಯಾವುದೇ ಉತ್ತರವನ್ನು ನೀಡಿರುವುದಿಲ್ಲವಾದ್ದರಿಂದ, ಇವರ ಮೇಲಿನ ಆರೋಪಗಳ ಸತ್ಯಾಸತ್ಯತೆಯನ್ನು ಇಲಾಖಾ ವಿಚಾರಣೆ ಮೂಲಕ ತಿಳಿಯಲು ಮೀನುಗಾರಿಕೆ ನಿರ್ದೇಶಕರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಕಛೇರಿ ಆದೇಶ ಸಂಖ್ಯೆ:ಆಡಳಿತ/2/84/1998–99 ದಿನಾಂಕ:20.12.2001ರಲ್ಲಿ ಶ್ರೀ ಎ.ಎನ್. ಕುಮಾರ್, ಆಗಿನ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–1), ಹಗರಿಬೊಮ್ಮನಹಳ್ಳಿ, ಇವರನ್ನು 'ವಿಚಾರಣಾಧಿಕಾರಿ' ಯನ್ನಾಗಿ ಹಾಗೂ ಶ್ರೀ ಆರ್.ಸಿ. ಇವಣಗಿ, ಪ್ರಥಮ ದರ್ಜೆ ಸಹಾಯಕರು, ಮೀನುಗಾರಿಕೆ ಉಪ ನಿರ್ದೇಶಕರ ಕಛೇರಿ, ಬಳ್ಳಾರಿ, ಇವರನ್ನು ಮಂಡನಾಧಿಕಾರಿಯನ್ನಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11(2) ಮತ್ತು 5(ಸಿ)ರನ್ವಯ ನೇಮಕ ಮಾಡಿರುತ್ತಾರೆ.

3) ವಿಚಾರಣಾಧಿಕಾರಿಗಳು, ಈ ಪ್ರಕರಣದ ವಿಚಾರಣೆಯನ್ನು ಕೈಗೊಂಡಿರುತ್ತಾರೆ. ವಿಚಾರಣಾಧಿಕಾರಿಗಳು, ವಿಚಾರಣೆಯ ಸಮಯದಲ್ಲಿ ಆಪಾದಿತರಿಗೆ ಸಾಕಷ್ಟು ಕಾಲಾವಕಾಶವನ್ನು ನೀಡಿ ವಿಚಾರಣೆಗೆ ಹಾಜರಾಗುವಂತೆ ಸೂಚಿಸಿದ್ದರೂ

ಸಹ ಅವರು ಇದಕ್ಕೆ ಸ್ಪಂದಿಸದೆ ವಿಚಾರಣೆಗೆ ಗೈರು ಹಾಜರಾಗಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ 1957ರ ನಿಯಮ 11(20)ರ ಪ್ರಕಾರ ಆರೋಪಿ ಅಧಿಕಾರಿಯ ಗೈರುಹಾಜರಿಯಲ್ಲಿ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳು ತೀರ್ಮಾನಿಸಿ ಅದರಂತೆ ವಿಚಾರಣೆಯನ್ನು ಕೈಗೊಂಡಿರುತ್ತಾರೆ. ವಿಚಾರಣೆಯ ಸಮಯದಲ್ಲಿ ಹಾಜರುಪಡಿಸಿದ ದಾಖಲೆಗಳು, ಮಂಡನಾಧಿಕಾರಿಗಳು ಮಂಡಿಸಿದ ವಾದ ಹಾಗೂ ಆರೋಪ ಪರ ಸಾಕ್ಷಿಗಳ ಹೇಳಿಕೆಗಳು, ಇತ್ಯಾದಿ ಪರಿಶೀಲಿಸಿ ಆರೋಪಿತರ ಮೇಲೆ ಹೊರಿಸಲಾಗಿರುವ ಎಲ್ಲಾ 08 ಆರೋಪಗಳು ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ತೀರ್ಮಾನಿಸಿರುತ್ತಾರೆ. ವಿಚಾರಣೆಯಲ್ಲಿ ಸಾಬೀತಾಗಿರುವ 08 ಆರೋಪಗಳು ಸಂಕ್ಷಿಪ್ತವಾಗಿ ಈ ಕೆಳಗಿನಂತಿವೆ:–

**ಆರೋಪ ಸಂಖ್ಯೆ 1:** ಆಪಾದಿತ ಅಧಿಕಾರಿಯಾದ ಶ್ರೀ ಕೆ.ಎಂ.ರೇಣುಕಾರಾಧ್ಯ ಇವರು ಹಿಂದೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಕೂಡ್ಲಿಗಿ, ಈ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಹರಪನಹಳ್ಳಿ ಹಾಗೂ ಹಡಗಲಿ ತಾಲ್ಲೂಕುಗಳ ಅಧಿಕ ಪ್ರಭಾರ ವಹಿಸಿಕೊಂಡು ಕಾರ್ಯನಿರ್ವಹಿಸಿದ ಅವಧಿಯಲ್ಲಿ 1996–97, 1997–98 ಮತ್ತು 1998–99ನೇ ಸಾಲಿನಲ್ಲಿ ಕೆರೆಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿಗೆ ಸಂಬಂಧಿಸಿದಂತೆ ಕೆಳ ಕಾಣಿಸಿದ ಒಟ್ಟು ರೂ.61,134–00ಗಳ ನಷ್ಟಕ್ಕೆ ಜವಾಬ್ದಾರರಾಗಿರುತ್ತಾರೆ.

| | | | |
|---|---|---|---|
| 1) | ವಸೂಲು ಮಾಡದೇ ಇರುವ ಕೆರೆಗಳ ಗುತ್ತಿಗೆ ಹಣದ ಬಾಬ್ತು | – | ರೂ.4,119–00 |
| 2) | ನವೀಕರಿಸದೇ ಇರುವ ಕೆರೆಗಳ ಗುತ್ತಿಗೆ ಹಣದ ಬಾಬ್ತು | – | ರೂ.3,750–00 |
| 3) | ವಿಲೇವಾರಿ ಮಾಡದ ಕೆರೆಗಳ ಗುತ್ತಿಗೆ ಹಣದ ಬಾಬ್ತು | – | ರೂ.7,695–00 |
| 4) | ಕೆರೆಯನ್ನು ವಿಲೇವಾರಿ ಮಾಡಿ ಪ್ರಸ್ತಾವನೆಯನ್ನು ಸಲ್ಲಿಸದಿರುವ ಗುತ್ತಿಗೆ ಹಣದ ಬಾಬ್ತು | – | ರೂ.45,570–00 |
| | **ಒಟ್ಟು** | | **ರೂ.61,134–00** |

**ಆರೋಪ ಸಂಖ್ಯೆ 2:** ಆಪಾದಿತ ಅಧಿಕಾರಿಯು 1997–98ನೇ ಸಾಲಿನಲ್ಲಿ ಕೂಡ್ಲಿಗಿ ತಾಲ್ಲೂಕಿನಲ್ಲಿ ಕೆರೆಗಳನ್ನು ವಿಲೇವಾರಿ ಮಾಡಿದಾಗ ದಿನಾಂಕ:25.09.1997ರಂದು ಹರಾಜು ಪ್ರಕಟಣೆಯ ಕ್ರಮ ಸಂಖ್ಯೆ 25 ರಲ್ಲಿನ ಗುಂಡುಮುಣುಗು ದೊಡ್ಡ ಕೆರೆಯನ್ನು ಹರಾಜು ಮಾಡಿದ ಹರಾಜು ಪಟ್ಟಿಗಳನ್ನು ಎರಡೆರಡು ತಯಾರಿಸಿ ಎರಡು ಪಟ್ಟಿಗಳಲ್ಲಿ ಒಂದನ್ನು ಸಂದರ್ಭನುಸಾರ ಉಪಯೋಗಿಸಿಕೊಂಡು ಸರ್ಕಾರಕ್ಕೆ ಮೋಸ ಮಾಡುವ ದುರುದ್ದೇಶದಿಂದ ಸಹಿ ಮಾಡಿರುವುದಿಲ್ಲ.

**ಆರೋಪ ಸಂಖ್ಯೆ 3:** ಆಪಾದಿತ ಅಧಿಕಾರಿಯು 1996–97ನೇ ಸಾಲಿನಲ್ಲಿ ಕೂಡ್ಲಗಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಹರಪನಹಳ್ಳಿ ಮತ್ತು ಹಡಗಲಿ ತಾಲ್ಲೂಕುಗಳ ಅಧಿಕ ಪ್ರಭಾರವನ್ನು ವಹಿಸಿಕೊಂಡು ಕಾರ್ಯನಿರ್ವಹಿಸುತ್ತಿದ್ದಾಗ, ಜಿಲ್ಲಾ ಪಂಚಾಯತ್ ಯೋಜನೆಯಾದ ಮೀನುಮರಿ ಉತ್ಪಾದನೆ, ಸಾಕಣೆ ಮತ್ತು ಹಂಚಿಕೆಯಲ್ಲಿ ವಿವಿಧ ಮೀನುಮರಿ ಉತ್ಪಾದನೆ ಕೇಂದ್ರಗಳಿಂದ ಮೀನುಮರಿಗಳನ್ನು ಖರೀದಿಸಿ ಡಿ.ಸಿ.ಬಿಲ್‌ಗಳ ಮೂಲಕ ಹಣ ನಗದೀಕರಿಸಿ ಸಂಬಂಧಿತ ಮೀನುಮರಿ ಕೇಂದ್ರಗಳಿಗೆ ಹಣ ಪಾವತಿ ಮಾಡಿ ಖರೀದಿಸಲಾದ ಒಟ್ಟು ರೂ.1,45,509–00 ಗಳ ಮೌಲ್ಯದ ಮೀನುಮರಿಗಳನ್ನು, ಸಾಲದ ರೂಪದಲ್ಲಿ ಕೊಡಬಾರದೆಂಬ ಸೂಚನೆಯಿದ್ದರೂ ಸಹ ಸಾಲದ ರೂಪದಲ್ಲಿ ವಿತರಿಸಿ ಈ ಹಣವನ್ನು ಸಂಬಂಧಪಟ್ಟ ಮೀನು ಕೃಷಿಕರಿಂದ ವಸೂಲು ಮಾಡಿ ಸರ್ಕಾರಕ್ಕೆ ಜಮಾ ಮಾಡಿರುವ ಬಗ್ಗೆ ದಾಖಲೆಗಳು ಇರುವುದಿಲ್ಲ. ಅಲ್ಲದೆ ಕೊಂಡಜ್ಜಿ ಮೀನುಮರಿ ಕೇಂದ್ರದಿಂದ ರೂ.42,760–00ಗಳ ಮೌಲ್ಯದ ಮೀನುಮರಿಗಳನ್ನು ಸಾಲದ ರೂಪದಲ್ಲಿ ನೇರವಾಗಿ ಖರೀದಿಸಿ ಮಾರಾಟ ಮಾಡಿ ಸದರಿ ಹಣ ರೂ.42,760–00ಗಳನ್ನು ಕೊಂಡಜ್ಜಿ ಮೀನುಮರಿ ಉತ್ಪಾದನಾ ಕೇಂದ್ರಕ್ಕೆ ಪಾವತಿ ಮಾಡಿರುವುದಿಲ್ಲ.

**ಆರೋಪ ಸಂಖ್ಯೆ 4:** ಆಪಾದಿತ ಅಧಿಕಾರಿಯು ಹರಪನಹಳ್ಳಿ ತಾಲ್ಲೂಕಿನ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಕೆರೆಗಳನ್ನು ವಿಲೇವಾರಿ ಮಾಡಿದ್ದು ಅದರಲ್ಲಿ ನಾಗಲಾಪುರ ಕೆರೆಯನ್ನು ವಿಲೇವಾರಿ ಮಾಡದೇ ಶ್ರೀ ಭೀಮನಗೌಡ ತಂದೆ ಸೋಮನಗೌಡ, ರಾಗಿಮಸಲವಾಡ, ಹರಪನಹಳ್ಳಿ ಅವರಿಂದ ಕೆರೆಯ ಬಾಬ್ತು ರೂ.985–00 ಗಳನ್ನು ಹಾಗೂ ಮೀನುಮರಿ ಸರಬರಾಜು ಮಾಡುವ ಬಗ್ಗೆ ರೂ.1,015–00ಗಳನ್ನು ಪಡೆದು ದುರುಪಯೋಗಪಡಿಸಿಕೊಂಡಿದ್ದಾರೆ.

**ಆರೋಪ ಸಂಖ್ಯೆ 5:** ಆಪಾದಿತ ಅಧಿಕಾರಿಯು ಕೂಡ್ಲಗಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ರಾಜ್ಯ ವಲಯದ ಜಲಸಿರಿ ಯೋಜನೆಯನ್ನು ಕೂಡ್ಲಗಿ ಮತ್ತು ಹೆಚ್.ಬಿ.ಹಳ್ಳಿ ತಾಲ್ಲೂಕುಗಳಲ್ಲಿ ಅನುಷ್ಠಾನಗೊಳಿಸಲು ಒಟ್ಟು ರೂ.20,000–00ಗಳನ್ನು ದಿನಾಂಕ:29.03.1996 ರಂದು ಖಜಾನೆಯಿಂದ ನಗದೀಕರಿಸಿಕೊಂಡು ಯೋಜನೆಯನ್ನು ಅನುಷ್ಠಾನಗೊಳಿಸಿದ ಬಗ್ಗೆ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಬಳ್ಳಾರಿ,

ಇವರಿಗೆ ಯಾವುದೇ ಮಾಹಿತಿಯನ್ನು ಮತ್ತು ಉಪಯುಕ್ತತಾ ಪ್ರಮಾಣ ಪತ್ರವನ್ನು ಸಲ್ಲಿಸದೆ ಅಧಿಕಾರ ದುರುಪಯೋಗಪಡಿಸಿಕೊಂಡು ಯೋಜನೆ ಅನುಷ್ಠಾನಗೊಳಿಸಲು ವಿಫಲರಾಗಿದ್ದಾರೆ.

**ಆರೋಪ ಸಂಖ್ಯೆ 6:** ಆಪಾದಿತ ಅಧಿಕಾರಿಯು ದಿನಾಂಕ:26.07.1995ರಂದು ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಕೂಡ್ಲಗಿ ಕಛೇರಿಗೆ ಹಾಜರಾದಾಗ ಸದರೀ ಕಛೇರಿಯಲ್ಲಿ ದಿನಾಂಕ:28.02.1995ರಂದು ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿದ ಶ್ರೀ ಮಹಮ್ಮದ್ ಇಸಾಕ್ ಅವರಿಂದ ಸರ್ಕಾರಕ್ಕೆ ಬರಬೇಕಾದ ಹಣವನ್ನು ಅವರ ನಿವೃತ್ತಿ ವೇತನ ಭಾಗದಿಂದ ಆಗಿನ ಸಮಯದ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಕೂಡ್ಲಗಿ, ರವರು ಕಡಿತ ಮಾಡಿದ ರೂ.30,000–00 ಗಳಲ್ಲಿ ರೂ.4,101–35ಗಳನ್ನು ಮೀನುಗಾರಿಕೆ ಸಹಕಾರ ಸಂಘ, ವಿ.ವಿ.ಸಾಗರ, ಇವರಿಗೆ ಪಾವತಿ ಮಾಡಲು ಡಿ.ಡಿ. ತೆಗೆದು ಈ ಡಿ.ಡಿಯು ವಾಪಸ್ಸು ಬಂದಿದ್ದು, ಪತ್ರವ್ಯವಹಾರದಲ್ಲಿ ಉಳಿದು ಕೊನೆಗೆ ದಿನಾಂಕ:23.03.1998ರಲ್ಲಿ ನಗದೀಕರಿಸಿಕೊಂಡು ಹಣ ದುರುಪಯೋಗಪಡಿಸಿಕೊಂಡಿರುತ್ತಾರೆ.

**ಆರೋಪ ಸಂಖ್ಯೆ 7:** ಆಪಾದಿತ ಅಧಿಕಾರಿಯು 1995–96ನೇ ಸಾಲಿನಲ್ಲಿ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಕೂಡ್ಲಗಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಜಿಲ್ಲೆಯ ವಿವಿಧ ಮೀನುಮರಿ ಉತಾದನಾ ಕೇಂದ್ರಗಳಿಂದ ರೂ.20,930–00ಗಳ ಬೆಲೆಯ ಮೀನುಮರಿಗಳನ್ನು ಆಮದು ಮಾಡಿಕೊಂಡು ಅದನ್ನು ಸಾಲದ ರೂಪದಲ್ಲಿ ಸರಬರಾಜು ಮಾಡಿ ಈ ಹಣವು ಸರ್ಕಾರಕ್ಕೆ ಪಾವತಿಯಾಗಿರುವುದಿಲ್ಲ.

**ಆರೋಪ ಸಂಖ್ಯೆ 8:** ಆಪಾದಿತ ಅಧಿಕಾರಿಯು ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಕೂಡ್ಲಗಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ 1995–96ನೇ ಸಾಲಿನಲ್ಲಿ ಎ.ಸಿ.ಬಿಲ್ ಸಂಖ್ಯೆ:30/95–96 ದಿನಾಂಕ:30.03.1996 ರಂದು ರೂ.5.000–00 ಮತ್ತು ಎ.ಸಿ.ಬಿಲ್ ಸಂಖ್ಯೆ:31/95–96 ದಿನಾಂಕ:30.03.1996ರಂದು ರೂ.1,000–00 ಖಜಾನೆಯಿಂದ ತೆಗೆದು ಈ ಹಣ ಖರ್ಚು ಮಾಡಿರುವುದಕ್ಕೆ ಸವಿವರ ವೆಚ್ಚದ ವಿವರಗಳನ್ನು ಮೇಲಾಧಿಕಾರಿಗಳಿಗೆ ಒಪ್ಪಿಸದೆ ಈ ಹಣ ದುರುಪಯೋಗಪಡಿಸಿಕೊಂಡಿರುತ್ತಾರೆ.

4) ವಿಚಾರಣಾಧಿಕಾರಿಗಳು ಸದರಿ ವಿಚಾರಣಾ ವರದಿಯನ್ನು ಇಲಾಖಾ ಮುಖ್ಯಸ್ಥರಾದ ಮೀನುಗಾರಿಕೆ ನಿರ್ದೇಶಕರಿಗೆ ಸಲ್ಲಿಸಿರುತ್ತಾರೆ. ನಿಯಮಾನುಸಾರ ಮೀನುಗಾರಿಕೆ ನಿರ್ದೇಶಕರು ಸದರಿ ವಿಚಾರಣಾ ವರದಿಯ ಪ್ರತಿಯನ್ನು ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಎರಡನೇ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ಆಪಾದಿತ ಅಧಿಕಾರಿಗೆ ನೀಡಿ ಈ ಬಗ್ಗೆ 15 ದಿನಗಳೊಳಗಾಗಿ ಲಿಖಿತ ಹೇಳಿಕೆ ಸಲ್ಲಿಸುವಂತೆ ಸೂಚಿಸಿದ್ದರೂ ಆಪಾದಿತ ಅಧಿಕಾರಿಯು ಈ ಕಾರಣ ಕೇಳುವ ತಿಳುವಳಿಕೆ ಪತ್ರಕ್ಕೆ ತಮ್ಮ ಹೇಳಿಕೆಯನ್ನು ನೀಡಿರುವುದಿಲ್ಲವೆಂದು ಮೀನುಗಾರಿಕೆ ನಿರ್ದೇಶಕರು ವರದಿ ಮಾಡುತ್ತಾ ವಿಚಾರಣಾ ವರದಿ ಹಾಗೂ ಸಂಬಂಧಪಟ್ಟ ದಾಖಲೆಗಳನ್ನು ಮುಂದಿನ ಕ್ರಮಕ್ಕಾಗಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

5) ಮೇಲೆ ಹೇಳಿರುವಂತೆ ಮೀನುಗಾರಿಕೆ ನಿರ್ದೇಶಕರು ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿದ್ದು, ವಿಚಾರಣಾಧಿಕಾರಿಗಳ ತೀರ್ಮಾನದಂತೆ ಸದರಿ ಆಪಾದಿತ ಅಧಿಕಾರಿಯು ಸರ್ಕಾರಕ್ಕೆ ಒಟ್ಟು ರೂ.3,02,434–00ಗಳ ಆರ್ಥಿಕ ನಷ್ಟವನ್ನು ಮಾಡಿರುವುದು ಸಾಬೀತಾಗಿರುವ ಕಾರಣ ಸದರಿ ಆಪಾದಿತ ಅಧಿಕಾರಿಯನ್ನು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಗಳು 1957ರ ನಿಯಮ 8(viii) ರನ್ವಯ ಸರ್ಕಾರಿ ಸೇವೆಯಿಂದ ಏಕೆ ವಜಾ ಮಾಡಬಾರದು ಎಂಬ ಬಗ್ಗೆ 15 ದಿನಗಳೊಳಗಾಗಿ ತಮ್ಮ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ವಿಚಾರಣಾ ವರದಿಯ ಪ್ರತಿಯೊಂದಿಗೆ ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ದಿನಾಂಕ:06.06.2005ರ ಕಾರಣ ಕೇಳುವ ಸೂಚನಾ ಪತ್ರದಲ್ಲಿ ಅವರಿಗೆ ಸೂಚಿಸಲಾಗಿತ್ತು. ಸದರಿ ಆಪಾದಿತ ಅಧಿಕಾರಿಯು ಕಾರಣ ಕೇಳುವ ಸೂಚನಾ ಪತ್ರಕ್ಕೆ ಸ್ಪಷ್ಟವಾದ, ಸಮಂಜಸವಾದ ಹಾಗೂ ಪೂರ್ಣವಾದ ಉತ್ತರವನ್ನು ಸಲ್ಲಿಸದೆ ಲಿಖಿತ ಹೇಳಿಕೆ ಸಲ್ಲಿಸಲು ಸಾಕಷ್ಟು ಕಾಲಾವಕಾಶವನ್ನು ನೀಡುವಂತೆ ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಮನವಿ ಮಾಡಿದ ಹಿನ್ನೆಲೆಯಲ್ಲಿ ಆರೋಪಿತ ಅಧಿಕಾರಿಗೆ ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾದ ಹಿಂಬರದಲ್ಲಿ ಒಂದು ತಿಂಗಳ ಕಾಲಾವಕಾಶ ನೀಡಿ ಈ ಅವಧಿಯೊಳಗೆ ಅವರ ಲಿಖಿತ ಸಮಜಾಯಿಷಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ನಂತರ ಆರೋಪಿತರು ಮೇಲೆ ಕ್ರಮ ಸಂಖ್ಯೆ (9)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ ಡಿಸೆಂಬರ್ 2005ರ ಅಂತ್ಯದವರೆಗೆ ಕಾಲಾವಕಾಶವನ್ನು ನೀಡುವಂತೆ ಮತ್ತೊಮ್ಮೆ ಸರ್ಕಾರಕ್ಕೆ ಸಲ್ಲಿಸಿದ ಮನವಿಯನ್ನು ಪರಿಗಣಿಸಿ ಮೇಲೆ ಕ್ರಮ ಸಂಖ್ಯೆ (10)ರಲ್ಲಿ ಓದಲಾದ ಹಿಂಬರದಲ್ಲಿ ಆರೋಪಿತರಿಗೆ ದಿನಾಂಕ:31.12.2005ರವರೆಗೆ ಅಂತಿಮವಾಗಿ ಕಾಲಾವಕಾಶವನ್ನು ನೀಡಲಾಗಿತ್ತು. ಹೀಗೆ ಎರಡು ಬಾರಿ ಕಾಲಾವಕಾಶವನ್ನು ನೀಡಿದಾಗ್ಯೂ, ಆರೋಪಿತರು ತಮ್ಮ ಪೂರ್ಣ ಸಮಜಾಯಿಷಿಯನ್ನು ಸಲ್ಲಿಸದೆ ದಿನಾಂಕ:29.12.2005ರಲ್ಲಿ ಸಲ್ಲಿಸಿರುವ ಮನವಿಯಲ್ಲಿ ಇತರ ವಿಷಯ ಪ್ರಸ್ತಾಪಿಸುವುದರೊಂದಿಗೆ ಈ ಬಗ್ಗೆ ದಿನಾಂಕ:15.01.2006 ರೊಳಗೆ ತಮ್ಮ ವಿವರಣೆಯನ್ನು ಸಲ್ಲಿಸುವುದಾಗಿ ತಿಳಿಸಿದ್ದರೂ ಸಹ ಅವರು ಸ್ಪಷ್ಟವಾದ ಮತ್ತು ಸಮಂಜಸವಾದ ಹಾಗೂ ಪೂರ್ಣವಾದ ಉತ್ತರವನ್ನು ಸಲ್ಲಿಸಿರುವುದಿಲ್ಲ.

6) ಈ ಮಧ್ಯೆ, ಮೇಲೆ ಕ್ರಮ ಸಂಖ್ಯೆ (12) ರಲ್ಲಿ ಓದಲಾದ ಪತ್ರದಲ್ಲಿ ಈ ಆಪಾದಿತ ಅಧಿಕಾರಿಯ ವಿರುದ್ಧ ಮೇಲ್ಕಂಡ ಪ್ರಕರಣವಲ್ಲದೇ ನಿರ್ದೇಶನಾಲಯದ ಹಂತದಲ್ಲಿ ಶಿಸ್ತು ಕ್ರಮ ಕುರಿತು ಅನೇಕ ಪ್ರಕರಣಗಳಲ್ಲಿ ವಿಚಾರಣೆ ಕೈಗೊಂಡಿರುವ ಬಗ್ಗೆ ಮೀನುಗಾರಿಕೆ ನಿರ್ದೇಶಕರು ಸರ್ಕಾರಕ್ಕೆ ವರದಿ ಮಾಡುತ್ತಾ ಸದರಿ ಪ್ರಕರಣಗಳಿಗೆ ಸಂಬಂಧಿಸಿದಂತೆ ಆರೋಪಿತರ ವಿರುದ್ಧ ಮಾಡಲಾದ ಸರ್ಕಾರಕ್ಕಾಗಿರುವ ನಷ್ಟದ ಹಣವನ್ನು ಆರೋಪಿತರು ಸರ್ಕಾರಕ್ಕೆ ಜಮಾ ಮಾಡಿರುವುದಾಗಿ ತಿಳಿಸಿರುತ್ತಾರೆ. ಮುಂದುವರೆದು, ಈ ಅಧಿಕಾರಿಯು ಪದೇ ಪದೇ ದುಷ್ಕೃತ್ಯಗಳನ್ನು (Habitual Chronic Offender) ಎಸಗಿ ಸರ್ಕಾರಕ್ಕೆ ಹಣ ನಷ್ಟ ಉಂಟು ಮಾಡುತ್ತಿರುತ್ತಾರೆಂದು ಹಾಗೂ ಸರ್ಕಾರದ ಎಲ್ಲಾ ಕೆಲಸಗಳಿಗೂ ತೊಂದರೆ ಉಂಟು ಮಾಡುತ್ತಿರುವುದರಿಂದ ಇವರಿಂದ ಸರ್ಕಾರಕ್ಕೆ ಆಗಿರುವ ನಷ್ಟದ ಹಣವನ್ನು ವಸೂಲು ಮಾಡುವುದರ ಜೊತೆಗೆ ಸದರಿ ಆಪಾದಿತ ಅಧಿಕಾರಿಗಳಿಗೆ ಕಠಿಣ ದಂಡನೆಯನ್ನು ವಿಧಿಸುವಂತೆ ಇಲಾಖಾ ಮುಖ್ಯಸ್ಥರಾದ ಮೀನುಗಾರಿಕೆ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

7) ಆರೋಪಿತ ಅಧಿಕಾರಿಯಾದ ಶ್ರೀ ಕೆ.ಎಂ. ರೇಣುಕಾರಾಧ್ಯ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2) ಮಾಗಡಿ, ಮೀನುಗಾರಿಕೆ ಇಲಾಖೆ, ಇವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಹಣ ರೂ.3,02,434–00ಗಳನ್ನು ಸರ್ಕಾರಕ್ಕೆ ಜಮಾ ಮಾಡಿದ್ದರೂ ವಿಚಾರಣೆಯಲ್ಲಿ ಆರೋಪಿತರು ತಪ್ಪಿತಸ್ಥರೆಂದು ಕಂಡು ಬಂದಿರುತ್ತದೆ. ಆದ್ದರಿಂದ, ಸದರಿಯವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(vi) ರನ್ವಯ "ಕಡ್ಡಾಯ ನಿವೃತ್ತಿ"ಗೊಳಿಸುವ (Compulsory Retirement) ದಂಡನೆಯನ್ನು ವಿಧಿಸಲು ಶಿಸ್ತು ಪ್ರಧಿಕಾರವು ತೀರ್ಮಾನಿಸಿದೆ. ಈ ಬಗ್ಗೆ ಕರ್ನಾಟಕ ಲೋಕ ಸೇವಾ ಆಯೋಗದೊಂದಿಗೆ ನಿಯಮಾನುಸಾರ ಸಮಾಲೋಚಿಸಿದ್ದು, ಅದರಂತೆ ಕಾರ್ಯದರ್ಶಿಗಳು, ಕರ್ನಾಟಕ ಲೋಕ ಸೇವಾ ಆಯೋಗ, ಬೆಂಗಳೂರು, ರವರು ಮೇಲೆ ಕ್ರಮ ಸಂಖ್ಯೆ (11)ರಲ್ಲಿ ಓದಲಾದ ದಿನಾಂಕ:06.12.2006ರ ಪತ್ರದಲ್ಲಿ ಈ ಪ್ರಕರಣವನ್ನು ಆಯೋಗವು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಕೆ.ಎಂ.ರೇಣುಕಾರಾಧ್ಯ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2) ಇವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಹಣ ರೂ.3,02,434–00 ಗಳನ್ನು ಅವರಿಂದ ವಸೂಲು ಮಾಡಲು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 3(vi) ರನ್ವಯ "ಕಡ್ಡಾಯ ನಿವೃತ್ತಿ" ಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿರುವ ಸರ್ಕಾರದ ಪ್ರಸ್ತಾವನೆಗೆ ಸಹಮತಿಸಿದೆಯೆಂದು ತಿಳಿಸಿರುತ್ತಾರೆ. ಅದರಂತೆಯೆ ಈ ಬಗ್ಗೆ ಸಕಲ ವಲಯಗಳಿಂದ ಕೂಲಂಕಷವಾಗಿ ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ 1ನೇ ಷೆಡ್ಯೂಲ್‌ನ ಕ್ರಮ ಸಂಖ್ಯೆ:23ರ ಪ್ರಕಾರ ಸಚಿವ ಸಂಪುಟದ ಅನುಮೋದನೆ ಪಡೆದುಕೊಂಡು ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಪಸಂಮೀ 241 ಮೀಇಸೇ 2003, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಕೆ.ಎಂ. ರಾಣುಕಾರಾಧ್ಯ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಮೀನುಗಾರಿಕೆ ಇಲಾಖೆ, ಮಾಗಡಿ, ರಾಮನಗರ ಜಿಲ್ಲೆ, ಇವರು ಎಸಗಿರುವ ತೀವ್ರತರವಾದ ಕರ್ತವ್ಯಲೋಪ, ದುರ್ನಡತೆಗಾಗಿ ಹಾಗೂ ಸರ್ಕಾರದ ರೂ.3,02,434–00 (ರೂಪಾಯಿ ಮೂರು ಲಕ್ಷದ ಎರಡು ಸಾವಿರದ ನಾಲ್ಕುನೂರು ಮೂವತ್ತನಾಲ್ಕು ಮಾತ್ರ)ಗಳ ಹಣವನ್ನು ತಾತ್ಕಾಲಿಕವಾಗಿ ದುರುಪಯೋಗಪಡಿಸಿಕೊಂಡಿರುವುದು ದೃಢಪಟ್ಟಿರುವುದರಿಂದ, ಅವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(vi) ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಕಡ್ಡಾಯವಾಗಿ ನಿವೃತ್ತಿಗೊಳಿಸಿ (Compulsorily Retired from Government Service) ಆದೇಶಿಸಿದೆ.

ತತ್ಸಂಬಂಧವಾಗಿ ಶ್ರೀ ಕೆ.ಎಂ.ರೇಣುಕಾರಾಧ್ಯ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಮೀನುಗಾರಿಕೆ ಇಲಾಖೆ, ಮಾಗಡಿ, ರಾಮನಗರ ಜಿಲ್ಲೆ, ಇವರನ್ನು ತತ್‌ಕ್ಷಣದಿಂದಲೇ ಅವರ ಈಗಿನ ಹುದ್ದೆಯ ಕರ್ತವ್ಯಗಳಿಂದ ಬಿಡುಗಡೆಗೊಳಿಸಲು ಕೂಡಲೇ ಕ್ರಮ ಕೈಗೊಳ್ಳುವಂತೆ ಹಾಗೂ ಅವರ ಹುದ್ದೆಗೆ ಸೂಕ್ತ ಪ್ರಭಾರ ವ್ಯವಸ್ಥೆಯನ್ನು ಮಾಡುವಂತೆಯೂ ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು, ಇವರಿಗೆ ನಿರ್ದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎಂ. ರಾಜಣ್ಣ**

ಪಿ.ಆರ್. 19

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ)

**ಕಂದಾಯ ಸಚಿವಾಲಯ**

**ವಿಷಯ:** ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಗೆ 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಪ್ರಸ್ತಾವನೆ:**

ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯು ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ **2250–00–103–2–00–101–ಸಹಾಯಾನುದಾನ (ಯೋಜನೆ)** ಅಡಿಯಲ್ಲಿ ರೂ.20.00 ಕೋಟಿಗಳನ್ನು ಅನುದಾನವನ್ನಾಗಿ ಒದಗಿಸಲಾಗಿದೆ.

ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯು 2008–09ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಮುಂದುವರೆಸಿ ಕಾರ್ಯಗತಗೊಳಿಸಲು ಇದುವರೆವಿಗೆ ರೂ. 6.00 ಕೋಟಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

2008–09ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಗೆ ಆಯವ್ಯಯದಲ್ಲಿ ಲಭ್ಯವಿರುವ ಅನುದಾನವನ್ನು ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ. ಕಂಇ 107 ಆರ್‌ಇಹೆಚ್ 2008, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2008**

ಸರ್ಕಾರವು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಲೆಕ್ಕ ಶೀರ್ಷಿಕೆ **2250–00–103–2–00–101 ಸಹಾಯಾನುದಾನ (ಯೋಜನೆ)** ಅಡಿಯಲ್ಲಿ 2008–09ನೇ ಸಾಲಿಗೆ ಒದಗಿಸಿರುವ ಅನುದಾನದಲ್ಲಿ 100.00 ಲಕ್ಷ ರೂಪಾಯಿಗಳ (ಒಂದು ನೂರು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಿ ಆದೇಶಿಸಿದೆ.

1. ಈ ಆದೇಶದನ್ವಯ ಬಿಡುಗಡೆ ಮಾಡಿದ ಹಣವನ್ನು ಮಂಜೂರು ಮಾಡಿರುವ ಉದ್ದೇಶಗಳಿಗಾಗಿ ಬಳಸಿಕೊಂಡು ವಿನಿಯೋಗಿತ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.
2. ಈ ಹಣವನ್ನು ಅನುದಾನದ ಬಿಲ್ಲಿನ ಮೂಲಕ ಡ್ರಾ ಮಾಡುವುದು.
3. ಅಧೀನ ಕಾರ್ಯದರ್ಶಿ (ಪುನರ್ವಸತಿ), ಕಂದಾಯ ಇಲಾಖೆ ಇವರು ಹಣ ಡ್ರಾ ಮಾಡಲು ನೆಟ್‌ವರ್ಕ್ ಮ್ಯಾನೇಜ್‌ಮೆಂಟ್ ಸೆಂಟರ್, ಖಜಾನೆ ಇಲಾಖೆ, ಖನಿಜ ಭವನ, ಬೆಂಗಳೂರು ಇಲ್ಲಿಗೆ ಅಥರೈಸೇಷನ್ ನೀಡುವ ಅಧಿಕಾರಿಯಾಗಿರುತ್ತಾರೆ.
4. ಸರ್ಕಾರದ ಉಪ ಕಾರ್ಯದರ್ಶಿ (ಭೂಸ್ವಾಧೀನ ಮತ್ತು ಪುನರ್ವಸತಿ) ಕಂದಾಯ ಇಲಾಖೆ ಇವರು ಮೇಲು ರುಜು ಮಾಡಿದ ಬಿಲ್ಲುಗಳನ್ನು ರಾಜ್ಯ ಹುಜೂರ್ ಖಜಾನೆಗೆ ಸಲ್ಲಿಸುವುದು.
5. ಈ ಅನುದಾನದ ಚೆಕ್ಕನ್ನು ಆಯುಕ್ತರು, ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿ, ಬಸವ ಕಲ್ಯಾಣ, ಬೀದರ್ ಜಿಲ್ಲೆ ಇವರ ಹೆಸರಿನಲ್ಲಿ ನೀಡುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ. ಎಫ್‌ಡಿ 1 ಟಿಎಫ್‌ಪಿ 2003, ದಿನಾಂಕ 12/6/2003ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 67

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾ–2 ಮತ್ತು ಪುನರ್ವಸತಿ)

**ವಿಷಯ:** ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಗೆ 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಪ್ರಸ್ತಾವನೆ:**

ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯು ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ **2250–00–103–2–00–101–ಸಹಾಯಾನುದಾನ (ಯೋಜನೆ)** ಅಡಿಯಲ್ಲಿ ರೂ.20.00 ಕೋಟಿಗಳನ್ನು ಅನುದಾನವನ್ನಾಗಿ ಒದಗಿಸಲಾಗಿದೆ.

ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯು 2008–09ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಮುಂದುವರೆಸಿ ಕಾರ್ಯಗತಗೊಳಿಸಲು ಇದುವರೆವಿಗೆ ರೂ. 7.00 ಕೋಟಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

2008–09ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಗೆ ಆಯವ್ಯಯದಲ್ಲಿ ಲಭ್ಯವಿರುವ ಅನುದಾನವನ್ನು ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ. ಕಂಇ 107 ಆರ್‌ಇಹೆಚ್ 2008, ಬೆಂಗಳೂರು, ದಿನಾಂಕ: 25ನೇ ನವೆಂಬರ್ 2008**

ಸರ್ಕಾರವು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಲೆಕ್ಕ ಶೀರ್ಷಿಕೆ **2250–00–103–2–00–101 ಸಹಾಯಾನುದಾನ (ಯೋಜನೆ)** ಅಡಿಯಲ್ಲಿ 2008–09ನೇ ಸಾಲಿಗೆ ಒದಗಿಸಿರುವ ಅನುದಾನದಲ್ಲಿ 100.00 ಲಕ್ಷ ರೂಪಾಯಿಗಳ (ಒಂದು ನೂರು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಿ ಆದೇಶಿಸಿದೆ.

